# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 990
2. ಸದಸ್ಯರ ಹೆಸರು : ಶ್ರೀ ಕೆ.ಎ.ತಿಪ್ಪೇಸ್ವಾಮಿ
3. ಉತ್ತರಿಸುವ ದಿನಾಂಕ : 12.03.2020
4. ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಪಟ್ಟಿ ಪ್ರಕಟಿಸಲು ಇರುವ ನಿಯಮಗಳ ವಿವರ ನೀಡುವುದು; | ಆಯೋಗವು ವಿವಿಧ ಹುದ್ದೆಗಳಿಗೆ ಸರ್ಕಾರ ಹಾಗೂ ಆಯಾ ಇಲಾಖೆ ನೀಡುವ ಪ್ರಸ್ತಾವನೆಗಳಿಗೆ ಅನುಗುಣವಾಗಿ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ವಿವಿಧ ನಿಯಮಗಳಡಿ ಆಯ್ಕೆ ಮಾಡಿ ಆಯ್ಕೆ ಪಟ್ಟಿ ಪ್ರಕಟಿಸುತ್ತದೆ. ಎಲ್ಲೆಲ್ಲಿ ಇಲಾಖೆಗಳ ವಿಶೇಷ ನಿಯಮಗಳು ಇವೆಯೋ ಅಂತಹ ನಿಯಮಗಳನ್ನು ಪಾಲನೆ ಮಾಡಿ ಆಯ್ಕೆ ಪಟ್ಟಿ ಪ್ರಕಟಿಸುತ್ತದೆ. |
| ಆ) | ಯಾವುದೇ ಹುದ್ದೆಗೆ ಆಯ್ಕೆ ಮಾಡಿದಾಗ ಅಂತಿಮ ಪಟ್ಟಿ ಪ್ರಕಟಿಸುವ ಮುನ್ನ ತಾತ್ಕಾಲಿಕ ಪಟ್ಟಿ ಪ್ರಕಟಿಸಲು ಇರುವ ನಿಯಮಗಳ ವಿವರ ನೀಡುವುದು; | ಯಾವುದೇ ನಿಯಮಗಳಲ್ಲಿ ತಾತ್ಕಾಲಿಕ ಪಟ್ಟಿ ಪ್ರಕಟಿಸುವ ಬಗ್ಗೆ ಉಲ್ಲೇಖಿಸಿರುವುದಿಲ್ಲ. ಆದಾಗ್ಯೂ ಆಯೋಗವು ಅಭ್ಯರ್ಥಿಗಳ ಅನುಕೂಲಕ್ಕಾಗಿ ತಾತ್ಕಾಲಿಕ ಪಟ್ಟಿಯನ್ನು ಸಿದ್ಧಪಡಿಸುತ್ತಿದೆ. |
| ಇ) | ತಾತ್ಕಾಲಿಕ ಪಟ್ಟಿ ಪ್ರಕಟಿಸದೇ ಇದ್ದಲ್ಲಿ, ಪ್ರಮಾಣಿಕ ಅಭ್ಯರ್ಥಿಗಳಿಗೆ ಆಗುವ ತೊಂದರೆ ಮತ್ತು ಅನ್ಯಾಯವನ್ನು ಸರಿಪಡಿಸಿಕೊಳ್ಳಲು ಅವಕಾಶ ನಿರಾಕರಿಸಿದಂತೆ ಆಗುವುದಿಲ್ಲವೇ; (ವಿವರ ನೀಡುವುದು) | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ತಾತ್ಕಾಲಿಕ ಪಟ್ಟಿ ಪ್ರಕಟಿಸದೇ ಎಷ್ಟು ಅಂತಿಮ ಮತ್ತು ಪರಿಷ್ಕೃತ ಪಟ್ಟಿಗಳನ್ನು ಪ್ರಕಟಿಸಲಾಗಿದೆ; ಈ ಬಗ್ಗೆ ಕಳೆದ ಮೂರು ವರ್ಷದಲ್ಲಿ ಪ್ರಕಟಿಸಿದ್ದ ಪಟ್ಟಿಗಳ ಸಂಪೂರ್ಣ ವಿವರ ನೀಡುವುದು; | ಆಯೋಗವು ನಡೆಸುವ ನೇಮಕಾತಿಗೆ ಸಂಬಂಧಿಸಿದಂತೆ (ಲಭ್ಯವಿರುವ ಮಾಹಿತಿಗಳನ್ವಯ) ಈವರೆಗೂ ತಾತ್ಕಾಲಿಕ ಪಟ್ಟಿ ಪ್ರಕಟಿಸದೇ ಯಾವುದೇ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಿರುವುದಿಲ್ಲ. |
| ಉ) | ದಿನಾಂಕ: 22.08.2019ರಂದು ಪ್ರಕಟಿಸಿರುವ 1998 ಗೆಜೆಟೆಡ್ ಪ್ರೊಬೇಷನರ್‌ಗೆ ಸಂಬಂಧಿಸಿದಂತೆ ತಾತ್ಕಾಲಿಕ ಪಟ್ಟಿ ಪ್ರಕಟಿಸಿದ ದಿನಾಂಕದಿಂದ ಆಕ್ಷೇಪಣೆ ಸಲ್ಲಿಸಲು ಎಷ್ಟು ದಿನ ಕಾಲಾವಕಾಶ ನೀಡಲಾಗಿದೆ; (ವಿವರ ನೀಡುವುದು) | ಆಯೋಗವು ಮಾನ್ಯ ಉಚ್ಚ ನ್ಯಾಯಾಲಯ ಹಾಗೂ ಮಾನ್ಯ ಸರ್ವೋಚ್ಚ ನ್ಯಾಯಾಲಯಗಳ ತೀರ್ಪುಗಳನ್ವಯ 1998ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ ಹುದ್ದೆಗಳ ಪರಿಷ್ಕೃತ ಪಟ್ಟಿಯನ್ನು ಸಿದ್ಧಪಡಿಸಿ ದಿನಾಂಕ: 22.08.2019ರಂದು ಪ್ರಕಟಿಸಿರುವುದರಿಂದ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಿ, ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಊ) | ತಾತ್ಕಾಲಿಕ ಪಟ್ಟಿ ಪ್ರಕಟಣೆ ಮಾಡದೇ ಇದ್ದಲ್ಲಿ, ನಿಯಮಗಳ ಉಲ್ಲಂಘನೆಯಾಗುವುದಿಲ್ಲವೇ; | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

| | | |
|---|---|---|
| | ಇದಕ್ಕೆ ಕಾರಣ ಕರ್ತರು ಯಾರು; ವಿವರ ನೀಡುವುದು; | |
| ಋ) | ಆಕ್ಷೇಪಣೆಗಳಿಗೆ ಅವಕಾಶ ನೀಡದಿರುವುದರಿಂದ ಎಷ್ಟು ಅಭ್ಯರ್ಥಿಗಳು ಈ ಪಟ್ಟಿಯ ದೋಷಗಳಿಂದ ಕೆ.ಎ.ಟಿ., ಸಿ.ಎ.ಟಿ. ಮತ್ತು ಉಚ್ಚ ನ್ಯಾಯಾಲಯದ ಮೊರೆ ಹೋಗಿದ್ದಾರೆ; ಈ ಪ್ರಕರಣದಲ್ಲಿ ಲೋಕ ಸೇವಾ ಆಯೋಗವನ್ನು ಪಾರ್ಟಿ ಮಾಡಲಾಗಿದೆಯೇ; (ವಿವರ ನೀಡುವುದು) | 1) ಕೆ.ಎ.ಟಿ. ಮತ್ತು ಉಚ್ಚ ನ್ಯಾಯಾಲಯದಲ್ಲಿ ಇಂತಹ ಯಾವುದೇ ಪ್ರಕರಣ ಇರುವುದಿಲ್ಲ. ಮಾನ್ಯ ಕೇಂದ್ರ ಆಡಳಿತ ನ್ಯಾಯ ಮಂಡಳಿಯಲ್ಲಿ ಶ್ರೀಮತಿ ಮೀನಾ ನಾಗರಾಜ್ ಇವರು ಪ್ರಕರಣ ಸಂಖ್ಯೆ: ಓ.ಎ. 962/2019ರಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಸದರಿ ಪ್ರಕರಣವನ್ನು ಮಾನ್ಯ ಸಿ.ಎ.ಟಿ. ಯಿಂದ ದಿ: 20.12.2019ರಂದು ಮಾನ್ಯ ಕೆ.ಎ.ಟಿ.ಗೆ ವರ್ಗಾಯಿಸಲಾಗಿರುತ್ತದೆ.<br>2) ಇನ್ನಿತರೆ ಕಾರಣಗಳ ಆಧಾರದಲ್ಲಿ 93 ಪ್ರಕರಣಗಳು ಮಾನ್ಯ ಕೆ.ಎ.ಟಿ.ಯಲ್ಲಿ ಹಾಗೂ 11 ನ್ಯಾಯಾಂಗ ನಿಂದನೆ ಪ್ರಕರಣಗಳು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿವೆ. |
| ಎ) | ನಿಯಮ ಉಲ್ಲಂಘಿಸಿದ ಸಿಬ್ಬಂದಿ ಮತ್ತು ಅಧಿಕಾರಿಗಳ ವಿರುದ್ಧ ಇದುವರೆವಿಗೂ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ನಿಯಮ ಉಲ್ಲಂಘನೆ ಆಗದ ಕಾರಣ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಸಿಆಸುಇ 42 ಎಸ್‌ಇಆರ್–7 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ.